# ಕರ್ನಾಟಕ ವಿಧಾನ ಪರಿಷತ್ತು

(1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: : 1532

(2) ಸದಸ್ಯರ ಹೆಸರು : ಶ್ರೀ ಎನ್.ಎಸ್. ಭೋಸರಾಜು (ವಿಧಾನ ಸಭೆಯಿಂದ ಚುನಾಯಿತರಾದವರು)

(3) ಉತ್ತರಿಸಬೇಕಾದ ದಿನಾಂಕ : ದಿನಾಂಕ: 19.03.2020

(4) ಉತ್ತರಿಸುವ ಸಚಿವರು : ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಯಚೂರು ನಗದಲ್ಲಿ ಜಿಲ್ಲಾ ನ್ಯಾಯಾಲಯ ಸಂಕೀರ್ಣ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯಲ್ಲಿ ಹೊಸದಾಗಿ ಜಿಲ್ಲಾ ನ್ಯಾಯಾಲಯ ಸಂಕೀರ್ಣ ಹಾಗೂ ನ್ಯಾಯಾಂಗ ಅಧಿಕಾರಿಗಳ ವಸತಿ ಗೃಹ ನಿರ್ಮಾಣಕ್ಕಾಗಿ ಆರೋಗ್ಯ ಇಲಾಖೆಗೆ ಸೇರಿದ 10 ಎಕರೆ 32 ಗುಂಟೆ ಜಮೀನನ್ನು ಕಂದಾಯ ಇಲಾಖೆಯು ನ್ಯಾಯಾಂಗ ಇಲಾಖೆಗೆ ಹಂಚಿಕೆ ಮಾಡಿರುತ್ತದೆ. ದಿನಾಂಕ: 08.12.2018 ರಂದು ಶಂಕು ಸ್ಥಾಪನೆ ನೆರವೇರಿಸಲಾಗಿದೆ. ಮುಂದುವರಿದು, ಸದರಿ ಜಾಗದಲ್ಲಿರುವ ಹಳೆಯ ಶಿಥಿಲಗೊಂಡ ಕಟ್ಟಡಗಳು / ಕೊಠಡಿಗಳನ್ನು ಕೆಡವಲು ರಾಯಚೂರಿನಲ್ಲಿರುವ ಲೋಕೋಪಯೋಗಿ ಇಲಾಖೆಗೆ ಅನುಮತಿ ನೀಡಲಾಗಿದೆ.<br><br>ರಾಯಚೂರಿನಲ್ಲಿ ಹೊಸ ಜಿಲ್ಲಾ ನ್ಯಾಯಾಲಯ ಸಂಕೀರ್ಣವನ್ನು ನಿರ್ಮಿಸಲು ಲೇಔಟ್ ಯೋಜನೆ ಸಂಖ್ಯೆ: 14537/L ಮತ್ತು ನಕ್ಷೆ ಸಂಖ್ಯೆ: 14537/1, 14537/2/M, 14537/3M & 14537/4-6ಗೆ ಅನುಮೋದನೆ ನೀಡಲಾಗಿದೆ.<br><br>ರಾಯಚೂರು ನಗರದಲ್ಲಿ ಜಿಲ್ಲಾ ನ್ಯಾಯಾಲಯ ಸಂಕೀರ್ಣ ಕಟ್ಟಡ ನಿರ್ಮಾಣ ಕಾಮಗಾರಿಯು 2017-18ನೇ ಸಾಲಿನ ಲೆಕ್ಕ ಶೀರ್ಷಿಕೆ 4059- ನ್ಯಾಯಾಲಯ ಕಟ್ಟಡಗಳ ನಿರ್ಮಾಣ ಹೊಸ ಕಾಮಗಾರಿಗಳ ಅಪೆಂಡಿಕ್ಸ್ - ಇ ರಲ್ಲಿ ರೂ.1000.00 ಲಕ್ಷ ಮೊತ್ತದ ಕ್ರಿಯಾ ಯೋಜನೆಗೆ ಸರ್ಕಾರದಿಂದ ಅನುಮೋದನೆ ನೀಡಲಾಗಿರುತ್ತದೆ.<br><br>ನ್ಯಾಯಾಲಯ ಸಂಕೀರ್ಣ ಕಟ್ಟಡದ ನೀಲಿ ನಕಾಶೆಯು ಮುಖ್ಯ ವಾಸ್ತುಶಿಲ್ಪಿ, ಬೆಂಗಳೂರು ಇವರಿಂದ ಅನುಮೋದನೆಗೊಂಡಿದ್ದು, ಕಾಮಗಾರಿಯ ಪರಿಷ್ಕೃತ ಅಂದಾಜು ತಯಾರಿಸಲಾಗುತ್ತಿದೆ. |

| | | |
|---|---|---|
| (ಆ) | ರಾಯಚೂರು ಜಿಲ್ಲೆಯ ಮಾನ್ವಿ ಮ್ಯಾಜಿಸ್ಟ್ರೇಟ್ ನ್ಯಾಯಾಲಯ ಸಂಕೀರ್ಣ ನಿರ್ಮಾಣ ಮಾಡುವ ಕಾಮಗಾರಿಗೆ ಮಂಜೂರಾತಿ ನೀಡಿರುವುದು ಯಾವಾಗ; ಕಾಮಗಾರಿ ಯಾವ ಹಂತದಲ್ಲಿ ಇದೆ; ಸದರಿ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಪೂರೈಸಲು ಸರ್ಕಾರ ಕ್ರಮ ಕೈಗೊಳ್ಳಲಿದೆ? | ರಾಯಚೂರು ಜಿಲ್ಲೆಯ ಮಾನ್ವಿ ಪಟ್ಟಣದಲ್ಲಿ ಹೊಸ ನ್ಯಾಯಾಲಯ ಕಟ್ಟಡ ನಿರ್ಮಾಣ ಕಾಮಗಾರಿಗಾಗಿ ರೂ.845.00 ಲಕ್ಷ ಮೊತ್ತದ ಅಂದಾಜು ಪಟ್ಟಿಗೆ ಸರ್ಕಾರದ ಪತ್ರ ಸಂಖ್ಯೆ: ಲೋಇ 47 ಬಿಜೆಪಿ 2017 ದಿನಾಂಕ 6.7.2017ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.<br><br>ಕರ್ನಾಟಕ ಉಚ್ಛ ನ್ಯಾಯಾಲಯದ ಪತ್ರ ದಿನಾಂಕ 26.07.2014 ರಲ್ಲಿ ನಕ್ಷೆ ಸಂಖ್ಯೆ:13803 / L1-5 ಕ್ಕೆ ಅನುಮೋದನೆ ನೀಡಲಾಗಿದೆ ಹಾಗೂ ಅನುಮೋದಿತ ಯೋಜನೆ ಸಂಖ್ಯೆ: 13803/1-2 ರನ್ವಯ, ರೂ.845.00 ಲಕ್ಷಗಳ ಅಂದಾಜು ಪಟ್ಟಿಗೆ ಕರ್ನಾಟಕ ಉಚ್ಛ ನ್ಯಾಯಾಲಯದ ಪತ್ರ ದಿನಾಂಕ 19.07.2018 ರಲ್ಲಿ ಅನುಮೋದನೆ ನೀಡಲಾಗಿದೆ.<br><br>ಪ್ರಸ್ತುತ ನೆಲಮಹಡಿಯ ಸ್ಲಾಬ್ ಮತ್ತು ಬ್ರಿಕ್ ಕಾಮಗಾರಿ ಹಾಗು ಸಂಪ್ ಮತ್ತು ಬೋರ್‌ವೆಲ್ ಕಾಮಗಾರಿ ಮುಗಿದಿದ್ದು, ಕಿಟಕಿ, ಬಾಗಿಲು, ಪ್ಲಾಸ್ಟಿಂಗ್ ಕಾಮಗಾರಿಯು ಹಾಗೂ ಮೊದಲನೆ ಮಹಡಿ ರೂಫ್ ಸ್ಲಾಬ್ ಕಾಮಗಾರಿಯು ಪ್ರಗತಿಯಲ್ಲಿದೆ. ಕಾಮಗಾರಿಯನ್ನು ದಿನಾಂಕ 31.8.2020 ರೊಳಗೆ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಲಾ/ ಎಲ್‌ಸಿಇ / 46 /2020

( ಜೆ.ಸಿ. ಮಾಧುಸ್ವಾಮಿ)
ಕಾನೂನು ಮತ್ತು ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು